ಜಿ.ಎಸ್. ದೀಕ್ಷಿತ್*

# ಕರ್ನಲ್ ಮಾರ್ಕ್ ವಿಲ್ಕ್ಸ್-ಆಧುನಿಕ ಕರ್ನಾಟಕದ ಪ್ರಥಮ ಇತಿಹಾಸಕಾರ

ಕರ್ನಲ್ ಮಾರ್ಕ್ ವಿಲ್ಕ್ಸ್ ಬರೆದ "History of Mysore" ಪುಸ್ತಕವನ್ನು ಸರ್ ಜೇಮ್ಸ್ ಮ್ಯಾಕಿಂಟಾಷ್ ಎನ್ನುವ ವಿಮರ್ಶಕನು ಭಾರತೀಯ ಇತಿಹಾಸದ ಮೇಲೆ ಆಧಾರಗಳನ್ನು ಅನುಮಾನಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಬರೆದ ಮೊದಲ ಗ್ರಂಥ ವೆಂದು ಹೇಳಿದ್ದಾನೆ. ಈ ಪುಸ್ತಕವನ್ನು ಬರೆಯುವುದಕ್ಕೆ ಅವನಿಗೆ ಎರಡು ತರಹ ಅನುಕೂಲಗಳಿದ್ದವು. ಒಂದನೆಯದು ಅವನು ವರ್ಣಿಸಿದಂಥ ಮೂರು ಮತ್ತು ನಾಲ್ಕನೆಯ ಆಂಗ್ಲೋ–ಮೈಸೂರು ಯುದ್ಧಗಳಲ್ಲಿ ಭಾಗವಹಿಸಿದವರ ನಿಕಟ ಪರಿಚಯ ಮತ್ತು ಶ್ರೀರಂಗ ಪಟ್ಟಣದ ಕೊನೆಯ ಮುತ್ತಿಗೆಯಲ್ಲಿ ಅವನೇ ಭಾಗವಹಿಸಿದ್ದು.

ವಿಲ್ಕ್ಸ್‌ನಿಗೆ ಇದ್ದ ಎರಡನೆಯ ಅನುಕೂಲ–ಅಮೂಲ್ಯ ಆಧಾರಗಳು ಅವನಿಗೆ ಲಭ್ಯವಿದ್ದವು. ಇವು ಯಾಕೆಂದರೆ ೧) ಅವನ ಸ್ನೇಹಿತ ಪೂರ್ಣಯ್ಯನು ತನ್ನ ಕೆಳಗಿನ ಅಧಿಕಾರಿ ಬಚ್ಚೆರಾಯನಿಗೆ ಹೇಳಿ ಅವನ ಸಹಾಯದಿಂದ ಯಾರ ಯಾರ ಹತ್ತಿರ ತಮ್ಮ ಮನೆತನದ ದಾಖಲೆಗಳಿರುತ್ತವೆಯೊ ಅಂಥವರಿಗೆ ವರದಿಗಳನ್ನು ಬರೆಯಕೊಡಲು ಹೇಳಿದನು. ಆ ವರದಿಗಳನ್ನು ಆಧರಿಸಿ ಒಂದು ಚಾರಿತ್ರಿಕ ದಾಖಲೆಯನ್ನು ನಿರ್ಮಿಸಲಾಯಿತು. ೨) ಚಿಕ್ಕದೇವರಾಯನ ಕಾಲದಲ್ಲಿ ಸಂಗ್ರಹಿಸಿದ ಶಾಸನಗಳನ್ನು ಮತ್ತು ಹಸ್ತಪ್ರತಿಗಳನ್ನು ಆಧರಿಸಿ ಬರೆದ ಕನ್ನಡ ಕಡತದ ಪರ್ಶಿಯನ್ ಭಾಷಾಂತರದ ಹಸ್ತಪ್ರತಿ ೩) ಮೆಕೆಂಜಿಯು ಸಂಗ್ರಹಿಸದ ೧೭೦೦ ಶಾಸನಗಳ ಪ್ರತಿಗಳು ಮತ್ತು ೭೦೦ ಹಸ್ತ ಪ್ರತಿಗಳು ೪) ಮದ್ರಾಸಿನಲ್ಲಿ ಫೋರ್ಟ್ ಸೇಂಟ್‌ಜಾರ್ಜನಲ್ಲಿದ್ದ ಸರ್ಕಾರೀ ಕಾಗದ ಪತ್ರಗಳು, ಅವನು ಉಪಯೋಗಿಸಿದ ಆಧಾರಗಳಲ್ಲಿ ಪ್ರಮುಖ ವಾದವು. ಇನ್ನು ಈ ಗ್ರಂಥದಿಂದ ನಮಗೆ ಆಗುವ ಉಪಯೋಗಗಳನ್ನು ನೋಡೋಣ.

ಸುಮಾರು ೧೮೦೦ರಲ್ಲಿ ಕನ್ನಡ ಮಾತನಾಡುವ ಪ್ರದೇಶಗಳ ಅಥವಾ ಕರ್ನಾಟಕದ ಮೇರೆಗಳನ್ನು ಗುರುತಿಸಿರುವುದು ಈ ಗ್ರಂಥದಿಂದ ಕನ್ನಡಿಗರಿಗೆ ಆಗುವ ಮಹದುಪಕಾರ ಬೀದರ್ ಊರಿನಿಂದ ಆರಂಭಿಸಿ ನೈಯತ್ಯ ದಿಕ್ಕಿನಲ್ಲಿ ನಡೆದು ಆದವಾನಿಗೆ ಬಂದು ಅಲ್ಲಿಂದ ಗುತ್ತಿಯ ಪಶ್ಚಿಮಕ್ಕೆ ಮತ್ತು ಅನಂತಪುರದ ಹತ್ತಿರ ಬಂದು ನಂದೀದುರ್ಗದ ಮಾರ್ಗವಾಗಿ ಪೂರ್ವಘಟ್ಟ ವನ್ನು ತಲುಪಬೇಕು. ಅಲ್ಲಿಂದ ದಕ್ಷಿಣಕ್ಕೆ ತಿರುಗಿ ಕೊಯಮುತ್ತೂರು ಜಿಲ್ಲೆಯಲ್ಲಿರುವ ಗಜ್ಜಲಹಟ್ಟಿಯ ಮಾರ್ಗವಾಗಿ ಪಶ್ಚಿಮಘಟ್ಟಗಳ ಒಂದು ಕಣಿವೆಯಲ್ಲಿರುವ ಇರುವ ಕೊಯಮುತ್ತೂರು, ಪೊಲ್ಲಾಚಿ ಮತ್ತು ಪಾಲ್ಘಾಟ್‌ಗಳ ಮಾರ್ಗವಾಗಿ ಬಂದು ವಾಯುವ್ಯ ದಿಕ್ಕಿನಲ್ಲಿ ಪಶ್ಚಿಮ ಘಟ್ಟಗಳಗುಂಟಾ ಉತ್ತರದಲ್ಲಿರುವ ಕೃಷ್ಣಾನದಿಯ ಉಗಮದವರೆಗೂ ಬರಬೇಕು. ಅಲ್ಲಿಂದ

* ಕೈಲಾಸ್ ಅಪಾರ್ಟ್‌ಮೆಂಟ್ಸ್ ಆನೆಯ ಮುಖ್ಯ ರಸ್ತೆ, ಮಲ್ಲೇಶ್ವರ, ಬೆಂಗಳೂರು-೫೬೦ ೦೦೩

ಮೊದಲು ಪೂರ್ವಕ್ಕೂ ನಂತರ ನೈಋತ್ಯದ ದಿಕ್ಕಿನಲ್ಲೂ ಬಂದು ಬೀದರನ್ನು ಸೇರಬೇಕು ಇವು ಕರ್ನಾಟಕ ಗಡಿಗಳು. ಕೇರಳದ ನೀಲೇಶ್ವರದಿಂದ ಉತ್ತರದ ಸದಾಶಿಗಡದವರೆಗೂ ಇರುವ ತೀರ ಪ್ರದೇಶವನ್ನು ವಿಲ್ಕ್ಸ್ ತುಳುವ ದೇಶವೆನ್ನುತ್ತಾನೆ. ಅಲ್ಲಿಂದ ಉತ್ತರ ಪ್ರದೇಶ ಮಹಾರಾಷ್ಟ್ರವೆಂದು ಅವನ ಹೇಳಿಕೆ.

ಮೈಸೂರಿನ ರೈತರ ಬಗೆಗೆ ವಿಲ್ಕ್ಸ್‌ನಿಗೆ ಬಹಳ ಕಳಕಳಿ ಇತ್ತು. ಭೂಮಿಯ ಒಡೆಯ ಯಾರು ಭೂಮಾಲೀಕನೊ ಅಥವಾ ಆ ದೇಶದ ರಾಜನೊ–ಈ ವಾದವನ್ನು ಎಲ್ಕ್ಸ್‌ನು ಆಧುನಿಕ ಯುಗದಲ್ಲಿ ಮೊದಲು ಅಭ್ಯಸಿಸಿದನು ಎರಡೂ ಪಕ್ಷಗಳ ವಾದಗಳನ್ನು ಚೆನ್ನಾಗಿ ಮಂಡಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ಅವನು ಆರಂಭಿಸಿದ ಈ ಚರ್ಚೆಯು ಇಂದಿಗೂ ನಡೆದಿದೆ.

ಭಾರತೀಯ ರೈತನ ಬಗೆಗೆ ವಿಲ್ಕ್ಸ್‌ನ ಅಭಿಪ್ರಾಯವು ಉಚಿತವಾಗಿತ್ತು ಕೆಲವು ರೈತರು ದಡ್ಡರು, ಸೋಮಾರಿಗಳೆಂದು ಹೇಳುತ್ತಿದ್ದರು. ವಿಲ್ಕ್ಸ್‌ನ ಮತದಲ್ಲಿ ಇಂಥ ಅಭಿಪ್ರಾಯಗಳು ಸರಿಯಾದದ್ದಲ್ಲ. ಅವರು ಬುದ್ಧಿವಂತರು. "ಅವರ ಜತೆಗೆ ನಾನು ಅನೇಕ ಸಲ ಅವರು ಕೈಕೊಳ್ಳುತ್ತಿದ್ದ ಕಾರ್ಯಕ್ರಮಗಳ ಉದ್ದೇಶವೇನೆಂದು ವಿಚಾರಿಸಿದಾಗ ಅವರ ಉತ್ತರಗಳು ಅತ್ಯಂತ ಸಮಂಜಸವಾಗಿರುತ್ತವೆ ಎಂದು ಹೇಳಿದ್ದಾನೆ.

ಬಾರಾ ಬಲೂತಿ ಪದ್ಧತಿಯ ಅವನ ವರ್ಣನೆಯನ್ನು ಮುಂದೆ ಬರೆದ ವಿದ್ವಾಂಸರೆಲ್ಲಾ ಪುನರುಚ್ಚರಿಸಿದ್ದಾರೆ. ಪಟೇಲ, ಶ್ಯಾನುಭೋಗ, ತಳವಾರ, ನೀರಗಂಟಿ ಇತ್ಯಾದಿ ಇವರ ಕೆಲಸಗಳ ಬಗ್ಗೆ ಇವನ ವರ್ಣನೆ ನಮಗೆ ಅವರ ಅಂದರೆ ಬಾರಬಲೂತಿ ಅಥವಾ ಆಯಗಾರರ ಕೆಲಸಗಳ ಕೈಪಿಡಿ ಎಂದು ಹೇಳಬಹುದು.

ಅದೇ ರೀತಿಯಾಗಿ ಬ್ರಿಟಿಷರು ಬರುವ ಮುಂಚೆ ನಮ್ಮ ಗ್ರಾಮಗಳು ಸ್ವಾಯತ್ತವಾಗಿದ್ದವೆನ್ನುವ ಅವನ ಹೇಳಿಕೆಯು ಪ್ರಸಿದ್ಧ ಅವನ ಪ್ರಕಾರ. ಯುದ್ಧ, ಜಯ, ಅಪಜಯ, ಕ್ರಾಂತಿ, ಇವು ಯಾವುವೂ ಗ್ರಾಮಗಳ ಆಂತರಿಕ ವ್ಯವಸ್ಥೆಯನ್ನು ಬದಲಾಯಿಸುತ್ತಿರಲಿಲ್ಲ ಹೊಸದಾಗಿ ಬಂದ ರಾಜ ಅಥವಾ ಅವನ ಪ್ರತಿನಿಧಿ ಗ್ರಾಮಗಳಲ್ಲಿ ಹಿಂದೆ ಇದ್ದ ಅಧಿಕಾರಿಗಳನ್ನು ಆ ಗ್ರಾಮದ ಮೇರೆಗಳನ್ನು ಅದರ ಒಳಾಡಳಿತವನ್ನು ಸ್ವಲ್ಪವೂ ಬದಲಾಯಿಸುತ್ತಿರಲಿಲ್ಲ. ಅವನ ಅಭಿಪ್ರಾಯದಲ್ಲಿ ಆಗ ಭಾರತವು ಇಂಥ ಅನೇಕ ಗಣರಾಜ್ಯಗಳನ್ನೊಳಗೊಂಡ ರಾಜ್ಯವಾಗಿತ್ತು.

ವಿಲ್ಕ್ಸ್ ಮತ್ತು ಪೂರ್ಣಯ್ಯ ಬಹಳ ಅನ್ಯೋನ್ಯವಾಗಿದ್ದರು. ಪೂರ್ಣಯ್ಯನ ಸಹಾಯದಿಂದ ವಿಲ್ಕ್ಸ್‌ನು ಈ ಗ್ರಂಥವನ್ನು ಬರೆಯುವುದು ಸುಗಮವಾಯಿತು. ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಹೈದರನು ತನ್ನ ಅಂತರಂಗದಲ್ಲಿರುವುದನ್ನು ಯಾರಿಗೂ ತಿಳಿಸುತ್ತಿರಲಿಲ್ಲ. ಮೊದಲನೆ ಆಂಗ್ಲೊ ಮೈಸೂರು ಯುದ್ಧ ಮುಗಿದ ಮೇಲೆ ಅವನಿಗೆ ಅದರಲ್ಲಿ ಜಯವಾಗಿದ್ದರೂ ಇಂಗ್ಲೀಷಿನವರ ಮೇಲೆ ಯುದ್ಧ ಮಾಡಿದ್ದು ತಪ್ಪೆಂದು ಅವನ ಅಂತರಂಗ ಅವನಿಗೆ ಹೇಳಿತು, ಅದನ್ನು ಅವನು ಪೂರ್ಣಯ್ಯನಿಗೆ ಮಾತ್ರ ಹೇಳಿದನು. "ನನಗೂ ಇಂಗ್ಲಿಷಿನವರಿಗೂ ಅಷ್ಟು ವ್ಯತ್ಯಾಸಗಳಿಲ್ಲ, ವಿನಾಕಾರಣ ಅವರ ಮೇಲೆ ಯುದ್ಧ ಮಾಡಿದೆ. ಹೀಗೆ ಮಾಡಿದ್ದು ಶುದ್ಧತಪ್ಪು ಎಂಥ ದೊಡ್ಡ ತಪ್ಪು ಎಂದರೆ ೧ ಕಾಸಿನಶೇಂದಿಗೆ ೧ ಲಕ್ಷ ರೂಪಾಯಿ ಕೊಟ್ಟು ಕೊಂಡುಕೊಂಡ ಹಾಗೆ ಹೀಗೆ ಮಾಡಿದ್ದಕ್ಕೆ ನಾನು ಮುಂದೆ ಕೆಟ್ಟದ್ದನ್ನು ಅನುಭವಿಸಬೇಕು. ಯಾಕೆಂದರೆ ನಾನು ಅವರ ಜೀಲಗಳನ್ನು ಬ್ರತ್‌ವೇಟರುಗಳನ್ನು ಸೋಲಿಸಬಹುದು. ಆದರೆ ಸಮುದ್ರವನ್ನು ಒಣಗಿಸಲಿಕ್ಕೆ ಆಗುವುದಿಲ್ಲ." ಅವನ ಅಭಿಪ್ರಾಯವೇನಾಗಿತ್ತೆಂದರೆ ಇಂಗ್ಲೀಷಿನವರ ಸಾಮಾರ್ಥ್ಯವೆಲ್ಲಾ ಅವರು ಸಮುದ್ರದ ಅಧಿಪತಿಗಳಾಗಿದ್ದುದರಿಂದ ಬಂದಿತ್ತು. ಎಷ್ಟೆ ಭೂಸೈನ್ಯಗಳನ್ನು ಸೋಲಿಸಿದರೂ ಸಮುದ್ರದ ಮೇಲಿನಿಂದ ಹೊಸಸೈನ್ಯಗಳನ್ನು ಅವರು ತರಿಸಿಕೊಳ್ಳಬಲ್ಲವರಾಗಿದ್ದರು. ಇಂಥ ತನ್ನ ಆಲೋಚನೆಗಳನ್ನು ಹೈದರ್ ಯಾರಿಗೂ ಹೇಳುತ್ತಿರಲಿಲ್ಲ. ಪೂರ್ಣಯ್ಯನಿಗೆ ಮಾತ್ರ ಹೇಳಿದ ಅವನು ತನ್ನ ಸ್ನೇಹಿತ ವಿಲ್ಕ್ಸ್‌ಗೆ ಹೇಳಿದ.

ಇಷ್ಟೆಲ್ಲ ಆದರೂ ಹೈದರ್ ಪೂರ್ಣಯ್ಯನನ್ನು ಸಂಪೂರ್ಣವಾಗಿ ನಂಬಲಿಲ್ಲ. ಹೈದರನ ಇನ್ನೊಬ್ಬ

ಮಂತ್ರಿ ಕೃಷ್ಣರಾವ್ ಇಬ್ಬರೂ ಚಾಣಾಕ್ಷರು. ಹೈದರ್ ಒಬ್ಬರ ಮೇಲೆ ಇನ್ನೊಬ್ಬನು ನಿಗಾ ಇಡುವ ಹಾಗೆ ಮಾಡಿ ಇಬ್ಬರನ್ನು ಹತೋಟಿಯಲ್ಲಿ ಇಟ್ಟುಕೊಂಡ.

ಟೀಪ್ಪುಗೆ ಇಷ್ಟು ಬುದ್ಧಿವಂತಿಕೆ ಇರಲಿಲ್ಲ. ಪೂರ್ಣಯ್ಯನಷ್ಟು ನಿಷ್ಠಾವಂತ ಸೇವಕರು ಅವನಿಗಿರಲಿಲ್ಲ ಆದರೂ ಅವನನ್ನು ತನ್ನ ಮತಕ್ಕೆ ಸೇರಿಸಿಕೊಳ್ಳ ಬೇಕೆಂದು ಇಚ್ಛಿಸಿದನು, ಬೇಡವೆನ್ನುವ ಧೈರ್ಯ ಪೂರ್ಣಯ್ಯನಿಗಿರಲಿಲ್ಲ ಟೀಪ್ಪೂನ ತಾಯಿ ಮಧ್ಯೆ ಬರದಿದ್ದರೆ ಇತಿಹಾಸವೇ ಬದಲಾಗುತ್ತಿತ್ತು.

ವಿಲ್ಕ್ಸ್‌ನ ಬರವಣಿಗೆಯಲ್ಲಿ ಹೈದರನ ಮತ್ತು ಟಿಪ್ಪುವಿನ ಗುಣದೋಷಗಳ ಹೋಲಿಕೆ ಅತ್ಯದ್ಭುತ ವಾಗಿದೆ. ನಮ್ಮ ಇತಿಹಾಸದಲ್ಲಿ ಅದಕ್ಕೆ ಬಹಳ ಮೇಲಿನ ಸ್ಥಾನ ಸಿಗುತ್ತದೆ. ಈ ಹೋಲಿಕೆಯ ಕೊನೆಗೆ ವಿಲ್ಕ್ಸ್‌ನ ತೀರ್ಮಾನ ಎಲ್ಲರೂಮೆಚ್ಚುವಂಥದ್ದು Hyder was an improving monarch and exihibited few innovations Tippu was innovating monarch and made no improvements. ಹೈದರ್ ಸುಧಾರಣೆಗಳನ್ನು ಮಾಡಿದ; ಬದಲಾವಣೆಗಳನ್ನು ಮಾಡಲಿಲ್ಲ. ಟಿಪ್ಪು ಬದಲಾವಣೆ ಗಳನ್ನು ಮಾಡಿದ, ಸುಧಾರಣೆಗಳನ್ನು ಮಾಡಲಿಲ್ಲ. Hyder was Seldom wrong and Tippu Seldom right in his estimate of charcter, ಇತರರ ಯೋಗ್ಯತೆಯನ್ನು ತಿಳಿದುಕೊಳ್ಳುವುದರಲ್ಲಿ ಹೈದರ್ ಯಾವಾಗಲೂ ತಪ್ಪಲಿಲ್ಲ, ಟಿಪ್ಪು ಎಲ್ಲಾ ಸಂದರ್ಭಗಳಲ್ಲಿಯೂ ತಪ್ಪುತ್ತಿದ್ದ.

ಇವರಿಬ್ಬರ ಬಗೆಗೂ ವಿಲ್ಕ್ಸ್‌ನ ಕೊನೆಯ ತೀರ್ಮಾನ ಆಗಿನ ಕಾಲದ ಜನಾಭಿಪ್ರಾಯವೇ ಆಗಿತ್ತು "ಹೈದರನು ಒಂದು ಸಾಮ್ರಾಜ್ಯವನ್ನು ಕಟ್ಟಲಿಕ್ಕೆ ಹುಟ್ಟಿದ; ಟಿಪ್ಪು ಅದನ್ನು ಕಳೆಯಲಿಕ್ಕೆ ಹುಟ್ಟಿದ."

## ಟಿಪ್ಪಣಿ

ವಿಲ್ಕ್ಸ್ ಬರೆದ "History of Mysore" ಇದರ ಪೂರ್ಣ ಹೆಸರು, Historical Sketches of the south of India" in on attempt to trace the "Histony of Mysore" from the origion of the Hindoo Government of that State, to the extinction of the Mohammedan dynasty in 1799 Founded chiefly on Indian authorities Collected by the author while officiatng for several years of Politcial Resident at the Court of Mysore ಮೂರು ಸಂಪುಟಗಳಲ್ಲಿ ೧೮೧೦ ರಿಂದ ೧೮೧೭ ರೊಳಗೆ ಪ್ರಕಟ ವಾದ ಈ ಗ್ರಂಥವನ್ನು ಮತ್ತೆ ಹ್ಯಾಮಿಕ್ ಎನ್ನುವವನು ೧೯೩೦ರಲ್ಲಿ ೨ ಸಂಪುಟಗಳಲ್ಲಿ ವಿಸ್ತೃತವಾದ ಟಿಪ್ಪಣಿ ಗಳೊಂದಿಗೆ ಸಂಪಾದಿಸಿದ ಪುನರ್ ಮುದ್ರಣವನ್ನು ಮೈಸೂರು ಸರ್ಕಾರದವರು ಪ್ರಕಟಿಸಿದ್ದಾರೆ. ಸಂಪಾದಕನು ಪ್ರಸ್ತಾವನೆಯಲ್ಲಿ ವಿಲ್ಕ್ಸ್‌ನ ಜೀವನ ಚರಿತ್ರೆಯನ್ನೂ ಮತ್ತು ಗ್ರಂಥದ ಉದ್ದಕ್ಕೂ ಅದರಲ್ಲಿ ಬರುವ ಊರುಗಳ, ಸಂಸ್ಥೆಗಳ, ವ್ಯಕ್ತಿಗಳ ಬಗ್ಗೆ ಉಪಲಬ್ಧವಿರುವ ಮಾಹಿತಿಯನ್ನು ಹಿನ್ನೆಲೆಯಾಗಿ ಟಿಪ್ಪಣಿಗಳಲ್ಲಿ ಕೊಟ್ಟಿರುವುದರಿಂದ, ಇದೊಂದು ದಕ್ಷಿಣ ಭಾರತದ ಇತಿಹಾಸ ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾದ ಕೈಪಿಡಿಯಾಗಿದೆ. ನಾನು ಈ ಎರಡನೆಯ ಆವೃತ್ತಿಯನ್ನು ಉಪಯೋಗಿಸಿದ್ದೇನೆ.

ವಿಲ್ಕ್ಸ್‌ನ ಇನ್ನೊಂದು ಬರವಣಿಗೆಯು ಆಗಿನ ಕಾಲದ ಮೈಸೂರಿನ ಸ್ಥಿತಿಗಳನ್ನು ಅಂಕಿ ಸಂಖ್ಯೆಗಳ ಸಹಾಯದಿಂದ ವಿವರಿಸುತ್ತದೆ. ಈ ವರದಿಯ ಹೆಸರು A Report on the interior administration, resources and expendinture of the Government of Mysore, under the system Prescribed by the orders of the Governor general in Council, dated 4th September 1799 ಇದನ್ನು ೧೮೦೫ರಲ್ಲಿ ಬ್ರಿಟಿಷ್ ಸರ್ಕಾರದವರು ಪ್ರಕಟಿಸಿದ್ದಾರೆ. ಭಾರತವನ್ನು ಗೆದ್ದ ಹೊಸದರಲ್ಲಿ ಬ್ರಿಟಿಷ್ ಆಡಳಿತಗಾರನ ಮೊದಮೊದಲ ವರದಿಗಳು ಭಾರತೀಯರ ಬಗೆಗೆ ಸಹಾನುಭೂತಿ ಪರವಾಗಿ ಮತ್ತು ವಿವರವಾಗಿ ಇರುತ್ತಿದ್ದವು. ನಂತರದ ವರದಿಗಳಲ್ಲಿ ಇವೆರಡೂ ಗುಣಗಳು ಕಡಿಮೆಯಾದವು ವಿಲ್ಕ್ಸ್‌ನ ಬರವಣಿಗೆಯಲ್ಲಿ ಈ ಎರಡೂ ಗುಣಗಳೂ ಇವೆ. ಅವನು ಇಂಗ್ಲೆಂಡಿನ ದಕ್ಷಿಣಕ್ಕಿರುವ ಮ್ಯಾನದ್ವೀಪದವನು ಅವನ ದಾಖಲೆಗಳು ಆ ದ್ವೀಪದಲ್ಲಿ ಅಥವಾ ಬ್ರಿಟಿಷ್ ಮ್ಯೂಜಿಯಂನಲ್ಲಿ ಅಥವಾ ಇಂಡಿಯಾ ಆಫೀಸ್ ಲೈಬ್ರೆರಿಯಲ್ಲಿ ಇನ್ನೂ ಲಭ್ಯವಿರುವ ಸಾಧ್ಯತೆ ಇದೆ.